## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2219 |
| ಮಾನ್ಯ ಸದಸ್ಯರ ಹೆಸರು | ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 18.03.2022 |
| ಉತ್ತರಿಸುವ ಸಚಿವರು | ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿಯಲ್ಲಿ ಬರುವ ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವತಿಯಿಂದ ಜಾರಿಯಲ್ಲಿರುವ ಯೋಜನೆಗಳಾವುವು: (ಸಂಪೂರ್ಣ ವಿವರ ನೀಡುವುದು) | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ವತಿಯಂದ ಜಾರಿಯಲ್ಲಿರುವ ಯೋಜನೆಗಳ ಸಂಪೂರ್ಣ ವಿವರವನ್ನು **ಅನುಬಂಧ-1ರಲ್ಲಿ** ನೀಡಲಾಗಿದೆ. |
| ಆ) | ಕಳೆದ 5 ವರ್ಷಗಳಿಂದ ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವತಿಯಿಂದ ಜಾರಿಯಲ್ಲಿರುವ ಯೋಜನೆಗಳಲ್ಲಿ ಫಲಾನುಭವಿಗಳ ಆಯ್ಕೆಯ ಮಾನದಂಡಗಳು ಮತ್ತು ಫಲಾನುಭವಿಗಳ ಆಯ್ಕೆಯ ವಿಧಾನಗಳಾವುವು (ವಿವರಗಳನ್ನು ನೀಡುವುದು) | ಕಳೆದ 5 ವರ್ಷಗಳಿಂದ ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವತಿಯಿಂದ ಜಾರಿಯಲ್ಲಿರುವ ಯೋಜನೆಗಳಲ್ಲಿ ಫಲಾನುಭವಿಗಳ ಆಯ್ಕೆಯ ಮಾನದಂಡಗಳು ಮತ್ತು ಫಲಾನುಭವಿಗಳ ಆಯ್ಕೆಯ ವಿಧಾನಗಳ ವಿವರವನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |
| ಇ) | ಮುಂಬರುವ ವರ್ಷಗಳಲ್ಲಿ ದೇವರಾಜು ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವತಿಯಿಂದ ಮುಂಬರುವ ವರ್ಷಗಳಲ್ಲಿ ಹಿಂದುಳಿದ ವರ್ಗಗಳ ಜನಾಂಗದ ಅಭಿವೃದ್ಧಿಗೆ ನೂತನವಾಗಿ ಜಾರಿಗೆ ತರುವ ಯೋಜನೆಗಳಾವುವು: (ವಿವರಗಳನ್ನು ನೀಡುವುದು) | 2022-23 ನೇ ಸಾಲಿನ ಆಯವ್ಯಯ ಭಾಷಣ ಕಂಡಿಕೆ 177 ರಲ್ಲಿ ಹಿಂದುಳಿದ ವರ್ಗಗಳ ಸುಮಾರು 25,000 ಯುವ ಜನರಿಗೆ ಕೌಶಲ್ಯ ಅಭಿವೃದ್ಧಿ ಪಡಿಸಿ ಉದ್ಯೋಗ ಮುಖಿಯನ್ನಾಗಿಸಲು ಸರ್ಕಾರದ ಸಂಸ್ಥೆಗಳಾದ ITIs, GTTC, KGTTI ರಲ್ಲಿ ಅಲ್ಪಾವಧಿ ಕೋರ್ಸುಗಳ ಮೂಲಕ ಕೌಶಲ್ಯಾ ತರಬೇತಿ ನೀಡಲು "ಅಮೃತ ಮುನ್ನಡೆ" ಎಂಬ ಹೊಸ ಯೋಜನೆಯನ್ನು ಘೋಷಿಸಲಾಗಿದೆ. ಸದರಿ ಯೋಜನೆಯನ್ನು 2022-23ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ 11 ನಿಗಮಗಳ ಮೂಲಕ ಅನುಷ್ಠಾನಗೊಳಿಸಲಾಗುವುದು. |

**ಸಂಖ್ಯೆ**:ಹಿಂವಕ 223 ಬಿಂಎಂಎಸ್ 2022

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

## ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ (ನಿ), ಬೆಂಗಳೂರು.

## ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ- 2219ಕ್ಕೆ ನಿಗಮದ ಉತ್ತರಕ್ಕೆ ಅನುಬಂಧ-1

ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ವತಿಯಿಂದ ಜಾರಿಯಲ್ಲಿರುವ ಯೋಜನೆಗಳ ಸಂಪೂರ್ಣ ವಿವರ ಈ ಕೆಳಕಂಡಂತಿದೆ.

1. **ಚೈತನ್ಯ ಸಹಾಯಧನ ಯೋಜನೆ:** ಬ್ಯಾಂಕುಗಳ ಸಹಯೋಗದೊಂದಿಗೆ ಕೃಷಿ ಅವಲಂಬಿತ ಚಟುವಟಿಕೆಗಳು, ವ್ಯಾಪಾರ, ಸಾರಿಗೆ, ಕೈಗಾರಿಕೆ, ಸೇವಾ ವಲಯದಲ್ಲಿ ಬರುವ ಆರ್ಥಿಕ ಚಟುವಟಿಕೆಗಳಿಗೆ ಘಟಕ ವೆಚ್ಚ ರೂ.25000/-ಗಳಿಂದ ರೂ.5.00ಲಕ್ಷಗಳವರೆಗೆ ಘಟಕಗಳಿಗೆ ಶೇ.20ರಷ್ಟು ಗರಿಷ್ಠ ರೂ.25000/-ಗಳ ಸಹಾಯಧನ ಮಂಜೂರು ಮಾಡಲಾಗುವುದು. ಉಳಿಕೆ ಮೊತ್ತ ಬ್ಯಾಂಕ್ ಪಾಲಿನ ಸಾಲವಾಗಿರುತ್ತದೆ.

2. **ಡಿ.ದೇವರಾಜ ಅರಸು ಸ್ವಯಂ ಉದ್ಯೋಗ ವೈಯಕ್ತಿಕ ಸಾಲ ಯೋಜನೆ:**- ಹಿಂದುಳಿದ ವರ್ಗಗಳ ಜನರು ಸ್ವಯಂ ಉದ್ಯೋಗಕ್ಕೆ ಆರ್ಥಿಕ ಚಟುವಟಿಕೆ ಕೈಗೊಳ್ಳಲು ಚಟುವಟಿಕೆ ಅನುಸಾರ ಗರಿಷ್ಠ ರೂ.2,00.000/-ಗಳ ವರೆಗೆ ಆರ್ಥಿಕ ನೆರವು. ಇದರಲ್ಲಿ, ಗರಿಷ್ಠ ಶೇ.15ರಷ್ಟು ಸಹಾಯಧನ, ಉಳಿಕೆ ಮೊತ್ತ ವಾರ್ಷಿಕ ಶೇ4ರ ಬಡ್ಡಿದರದಲ್ಲಿ ಸಾಲ.

3. **ಕಿರುಸಾಲ ಯೋಜನೆಯಲ್ಲಿ ಸೌಲಭ್ಯ**:-ಸ್ವ ಸಹಾಯ ಗುಂಪುಗಳ ಸದಸ್ಯರು ಕೈಗೊಳ್ಳುವ ಸಣ್ಣ ಮತ್ತು ಅತಿ ಸಣ್ಣ ವ್ಯಾಪಾರದ ಚಟುವಟಿಕೆಗಳಿಗೆ ಅಂದರೆ, ಹಣ್ಣು, ತರಕಾರಿ ಮಾರುವವರು, ಹಾಲು ಮಾರುವವರು, ಹೂ ಮಾರುವವರು, ತಳ್ಳುವ ಗಾಡಿ ವ್ಯಾಪಾರಿಗಳು ಮುಂತಾದ ಸಣ್ಣ ಪ್ರಮಾಣದ ವ್ಯಾಪಾರ ಚಟುವಟಿಕೆಗಳಿಗೆ ವಾರ್ಷಿಕ ಶೇಕಡ 4ರ ಬಡ್ಡಿ ದರದಲ್ಲಿ ಗರಿಷ್ಠ ರೂ.10,000/- ಸಾಲ ಹಾಗೂ ರೂ.5,000/-ಗಳ ಸಹಾಯಧನ. ಅರ್ಜಿದಾರರು ಬಿ.ಪಿ.ಎಲ್ ಕುಟುಂಬಕ್ಕೆ ಸೇರಿರಬೇಕು ಹಾಗೂ ಸರ್ಕಾರಿ/ಅರೆ ಸರ್ಕಾರಿ ಉದ್ಯೋಗದಲ್ಲಿ ಇರಬಾರದು.

4. **ಅರಿವು ಶೈಕ್ಷಣಿಕ ಸಾಲ ಯೋಜನೆ:** ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶೈಕ್ಷಣಿಕಾಭಿವೃದ್ಧಿಗಾಗಿ ಆರ್ಥಿಕ ನೆರವು ವಾರ್ಷಿಕ ರೂ.1.00 ಲಕ್ಷಗಳಂತೆ ಕೋರ್ಸ್‌ನ ಅವಧಿಗೆ ಗರಿಷ್ಠ ರೂ.4.00 ಲಕ್ಷಗಳಿಂದ ರೂ.5.00 ಲಕ್ಷಗಳವರೆಗೆ ಶೇ.2 ರಷ್ಟು ಬಡ್ಡಿದರದಲ್ಲಿ ಸಾಲ ಸೌಲಭ್ಯ ಒದಗಿಸುವುದು.

5. **ಸಾಂಪ್ರದಾಯಿಕ ಕುಶಲಕರ್ಮಿಗಳು ಮತ್ತು ವೃತ್ತಿ ಕಸುಬುದಾರರಿಗೆ ಸಾಲ ಮತ್ತು ಸಹಾಯಧನ**:-ಹಿಂದುಳಿದ ವರ್ಗಗಳ ಸಾಂಪ್ರದಾಯಿಕ ವೃತ್ತಿದಾರರು ಅಥವಾ ವೃತ್ತಿ ಕಸುಬುದಾರರು ತಮ್ಮ ವೃತ್ತಿಯ ಅಭಿವೃದ್ಧಿಗಾಗಿ, ಆಧುನಿಕ ಉಪಕರಣಗಳನ್ನು ಖರೀದಿಸಲು, ತಾಂತ್ರಿಕತೆಯನ್ನು ಮೇಲ್ದರ್ಜೆಗೇರಿಸಲು, ವೃತ್ತಿ ಅನುಸಾರ ಗರಿಷ್ಠ ರೂ.2,00,000/-ಗಳ ವರೆಗೆ ಆರ್ಥಿಕ ನೆರವು. ಇದರಲ್ಲಿ, ಗರಿಷ್ಠ ಶೇ.15ರಷ್ಟು ಸಹಾಯಧನ, ಉಳಿಕೆ ಮೊತ್ತ ಶೇ.2ರ ಬಡ್ಡಿದರದಲ್ಲಿ ಸಾಲ.

6. **ಗಂಗಾ ಕಲ್ಯಾಣ ನೀರಾವರಿ ಯೋಜನೆ:-** ಪ್ರವರ್ಗ-1, 2ಎ, 3ಎ ಮತ್ತು 3ಬಿ ಗೆ ಸೇರಿದ ಸಣ್ಣ ಮತ್ತು ಅತೀ ಸಣ್ಣ ರೈತರ ಜಮೀನುಗಳಿಗೆ ಒಂದು ಕೊಳವೆ ಬಾವಿ ಕೊರೆಯಿಸಿ, ಪಂಪ್‌ಸೆಟ್ ಉಪಕರಣಗಳನ್ನು ಸರಬರಾಜು ಮಾಡಿ ವಿದ್ಯುತ್ ಸಂಪರ್ಕ ಕಲ್ಪಿಸಿ, ನೀರಾವರಿ ಸೌಲಭ್ಯ ಒದಗಿಸಲಾಗುವುದು. ಘಟಕ ವೆಚ್ಚ ರೂ.2.50 ಲಕ್ಷಗಳಲ್ಲಿ ರೂ.2.00 ಲಕ್ಷಗಳ ಸಹಾಯಧನ ಹಾಗೂ ರೂ.50,000 /-ಗಳ ಶೇ.4 ರ ಬಡ್ಡಿದರದಲ್ಲಿ ಸಾಲ. ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ, ಬೆಂಗಳೂರು ಗ್ರಾಮಾಂತರ, ರಾಮನಗರ, ಕೋಲಾರ, ಚಿಕ್ಕಬಳ್ಳಾಪುರ, ತುಮಕೂರು ಜಿಲ್ಲೆಗಳಲ್ಲಿ ವೈಯಕ್ತಿಕ ಕೊಳವೆ ಬಾವಿಯ ಘಟಕ ವೆಚ್ಚ ರೂ.4.00 ಲಕ್ಷಗಳು, ಇದರಲ್ಲಿ ವಿದ್ಯುದೀಕರಣಕ್ಕೆ ಪ್ರತೀ ಕೊಳವೆ ಬಾವಿಗೆ ರೂ.50,000/-ಗಳನ್ನು ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಲಾಗುವುದು.

ವ್ಯವಸ್ಥಾಪಕ ನಿರ್ದೇಶಕರು

## ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ (ನಿ), ಬೆಂಗಳೂರು.

### ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ– 2219ಕ್ಕೆ ನಿಗಮದ ಉತ್ತರಕ್ಕೆ ಅನುಬಂಧ-2

I. ಫಲಾನುಭವಿಗಳ ಆಯ್ಕೆಯ ಮಾನದಂಡಗಳು ಈ ಕೆಳಕಂಡಂತಿದೆ.
ಫಲಾನುಭವಿಗಳನ್ನು ಆಯ್ಕೆ ಮಾಡಲು ಈ ಕೆಳಕಂಡ ಮಾನದಂಡ ನಿಗದಿಪಡಿಸಿದೆ.ಸೌಲಭ್ಯ ಕೋರಿ ಬರುವ ಅರ್ಜಿದಾರರನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಎಲ್ಲಾ ಜಾತಿ/ಉಪಜಾತಿಗಳಿಗೂ ಪ್ರಾತಿನಿಧ್ಯತೆ ನೀಡುವುದು. ವಿಶೇಷವಾಗಿ ಅತೀ ಹಿಂದುಳಿದ ಸಮುದಾಯಗಳಿಗೆ ಆದ್ಯತೆ ನೀಡಬೇಕು.

ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಿಂದ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಸರ್ಕಾರದ ಆದೇಶ ಸಂಖ್ಯೆ: ಸಕಇ/572/ಬಿಸಿಎ/1995 ದಿನಾಂಕ:23/02/1996ರಲ್ಲಿ ನಿಗಧಿಪಡಿಸಿರುವ ಮೀಸಲಾತಿಯಂತೆ ಈ ಕೆಳಕಂಡಂತೆ ಆಯ್ಕೆ ಮಾಡಬೇಕು.

| ಕ್ರ.ಸಂ. | ಪ್ರವರ್ಗ | ಅನುಪಾತ |
|---|---|---|
| 1 | 1 ಮತ್ತು 2ಎ | 70% |
| 2 | 3ಎ ಮತ್ತು 3ಬಿ | 30% |

ಪ್ರವರ್ಗ 1 ಮತ್ತು 2ಎಗೆ ಶೇಕಡ 70ರಷ್ಟು ಹಾಗೂ ಪ್ರವರ್ಗ 3ಎ ಮತ್ತು 3ಬಿಗೆ ಶೇಕಡ 30ರಷ್ಟು ಆಯ್ಕೆ ಮಾಡತಕ್ಕದ್ದು. ಪ್ರವರ್ಗ-1 ಮತ್ತು 2ಎನಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಹಿಂದುಳಿದ ವರ್ಗಗಳಲ್ಲಿ ಅತ್ಯಂತ ಹಿಂದುಳಿದ ಹಾಗೂ ಇತರೆ ಸಾಮಾಜಿಕವಾಗಿ ಶೈಕ್ಷಣಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದ ಹಾಗೂ ಈವರೆವಿಗೂ ನಿಗಮದಿಂದ ಸೌಲಭ್ಯವನ್ನು ಪಡೆಯದೇ ಇರುವ ಜಾತಿಗಳಿಗೆ ಆದ್ಯತೆ ನೀಡುವುದು.

ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಶೇಕಡ 33ರಷ್ಟು ಮಹಿಳಿಯರಿಗೆ ಮತ್ತು ಶೇಕಡಾ 5ರಷ್ಟು ಅಂಗವಿಕಲರಿಗೆ ಅದರಲ್ಲಿ ಕಡ್ಡಾಯವಾಗಿ ಶೇ.2.5ರಷ್ಟು ಮಹಿಳಾ ಅಂಗವಿಕಲರಿಗೆ ಆಯ್ಕೆ ಮಾಡುವುದು.

ವಿಧವೆಯರಿಗೆ/ಪರಿತ್ಯಕ್ತೆಯರಿಗೆ/ಹೆಚ್.ಐ.ವಿ ಪೀಡಿತರಿಗೆ/ಮಂಗಳ ಮುಖಿಯರಿಗೆ ಆದ್ಯತೆ ಮೇರೆಗೆ ಪರಿಗಣಿಸುವುದು.

ಆಯ್ಕೆ ಸಮಿತಿಯು ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಆಯಾ ಯೋಜನೆಗಳಲ್ಲಿ ಸರ್ಕಾರವು/ನಿಗಮಗಳು ಆಗಿಂದಾಗ್ಗೆ ಹೊರಡಿಸಿರುವ ಆದೇಶ ಮತ್ತು ಮಾರ್ಗಸೂಚಿಗಳ ಪ್ರಕಾರವೇ ಆಯ್ಕೆ ಮಾಡುವುದು.

ಸಮಾನ ಅರ್ಹತೆ ಇರುವ ನಿಗದಿತ ಗುರಿಗಿಂತ ಹೆಚ್ಚುವರಿಯಾಗಿ ಅರ್ಜಿಗಳು ಲಭ್ಯವಿದ್ದಲ್ಲಿ ಪ್ರವರ್ಗವಾರು, ಅಂಗವಿಕಲವಾರು, ಮಹಿಳಾವಾರು ಪ್ರತ್ಯೇಕವಾಗಿ ವರ್ಗೀಕರಿಸಿಕೊಂಡು ಲಾಟರಿ ಮೂಲಕ ಆಯ್ಕೆ ಮಾಡಬೇಕು.

II. **ಫಲಾನುಭವಿಗಳ ಆಯ್ಕೆಯ ವಿಧಾನಗಳು**

ನಿಗಮದ ಯೋಜನೆಗಳಡಿ ಸೌಲಭ್ಯ ಒದಗಿಸಲು ಅರ್ಜಿ ಆಹ್ವಾನಿಸಿ ಪತ್ರಿಕಾ ಪ್ರಕಟಣೆ ಹೊರಡಿಸಲಾಗುವುದು. ಸ್ವೀಕೃತ ಅರ್ಜಿಗಳನ್ನು ಪರಿಶೀಲಿಸಿ ಅರ್ಹ ಅರ್ಜಿಗಳನ್ನು ಪಟ್ಟಿ ಮಾಡಿಕೊಳ್ಳುವುದು. ಸ್ವಯಂ ಉದ್ಯೋಗ ಸಾಲ ಯೋಜನೆ, ಸಾಂಪ್ರದಾಯಿಕ ವೃತ್ತಿದಾರರ ಸಾಲ ಯೋಜನೆ, ಗಂಗಾ ಕಲ್ಯಾಣ ಯೋಜನೆ, ಕಿರುಸಾಲ ಯೋಜನೆಯಡಿ ಆಯಾ ವಿಧಾನಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯಲ್ಲಿ ಆಯಾ ಯೋಜನೆಗಳಿಗೆ ನಿಗದಿಪಡಿಸಿದ ಆರ್ಥಿಕ/ಭೌತಿಕ, ನಿಗದಿಪಡಿಸಿದ ಮಿತಿಯೊಳಗೆ ಹಾಗೂ ಆಯಾ ಯೋಜನೆಯ ಮಾರ್ಗಸೂಚಿಯನುಸಾರ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತದೆ.

ಬ್ಯಾಂಕ್ ಸಹಯೋಗದೊಂದಿಗೆ ಅನುಷ್ಠಾನಗೊಳಿಸುತ್ತಿರುವ ಚೈತನ್ಯ ಸಹಾಯಧನ ಯೋಜನೆ ಹಾಗೂ ಅರಿವು ಶೈಕ್ಷಣಿಕ ಸಾಲ ಯೋಜನೆಯಡಿ ಫಲಾನುಭವಿಗಳನ್ನು ಜಿಲ್ಲಾ ಮಟ್ಟದಲ್ಲಿ ಆಯಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ಆಯ್ಕೆ ಸಮಿತಿಗಳು ನಿಗಧಿತ ಭೌತಿಕ ಮತ್ತು ಆರ್ಥಿಕ ಗುರಿಯ ಮಿತಿಯೊಳಗೆ ಯೋಜನೆಗಳ ಮಾರ್ಗಸೂಚಿಯನುಸಾರ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತಿದೆ.

ವ್ಯವಸ್ಥಾಪಕ ನಿರ್ದೇಶಕರು